ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ರಾಜ್ಯದಲ್ಲಿರುವ ಮುಜರಾಯಿ ದೇವಾಲಯಗಳ ಕುರಿತು

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) -

ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

ಡಾ. ಜೈಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು) -

166 (1389+1390+1395) ಮಾನ್ಯ ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿ ಒಟ್ಟು ಎಷ್ಟು ದೇವಸ್ಥಾನಗಳಿವೆ ; ಇವುಗಳಲ್ಲಿ ಖಾಸಗಿ ದೇವಸ್ಥಾನಗಳೆಷ್ಟು ಮತ್ತು ಮುಜರಾಯಿಗೆ ಸೇರಿದ ದೇವಸ್ಥಾನಗಳೆಷ್ಟು ; (ವಿವರ ನೀಡುವುದು)

(ಆ) ಅವುಗಳಲ್ಲಿ ಎ.ಬಿ.ಸಿ. ದರ್ಜೆಯ ದೇವಾಲಯಗಳ ಸಂಖ್ಯೆ ಎಷ್ಟು ; (ವರ್ಗವಾರು ವಿವರ ನೀಡುವುದು) ಎ.ಬಿ.ಸಿ. ವರ್ಗದ ದೇವಾಲಯಗಳಲ್ಲಿ ಅರ್ಚಕರಿಗೆ ನೀಡಲಾಗುತ್ತಿರುವ ಮಾಸಿಕ ತಸ್ತೀಕ್ ಭತ್ಯೆಯ ಮೊತ್ತವೆಷ್ಟು ; ಇದನ್ನು ಯಾವ ಕಾಲಮಿತಿಯಲ್ಲಿ ಪರಿಷ್ಕರಿಸಲಾಗುವುದು ;

(ಇ) ಖಾಸಗಿ ದೇವಸ್ಥಾನಗಳನ್ನು ಮುಜರಾಯಿ ಇಲಾಖೆ ವ್ಯಾಪ್ತಿಗೆ ತೆಗೆದುಕೊಳ್ಳಬೇಕಾದರೆ, ಯಾವ ನಿಯಮಗಳನ್ನು ಅನುಸರಿಸಲಾಗುತ್ತದೆ ; (ವಿವರ ನೀಡುವುದು)

(ಈ) ಕಳೆದ ಮೂರು ವರ್ಷಗಳಲ್ಲಿ ಸದರಿ ದೇವಾಲಯಗಳಲ್ಲಿ ಹಣದ ರೂಪದಲ್ಲಿ ಸಂಗ್ರಹವಾದ ಒಟ್ಟು ಮೊತ್ತವೆಷ್ಟು ; (ವರ್ಗವಾರು ವಿವರ ನೀಡುವುದು)

(ಉ) ಕಳೆದ ಮೂರು ವರ್ಷಗಳಲ್ಲಿ ಸಂಗ್ರಹಿತವಾದ ಹಣದಲ್ಲಿ ಸದರಿ ದೇವಾಲಯಗಳ ಅಭಿವೃದ್ಧಿಗೆ ಬಳಸಲಾಗಿರುವ ಒಟ್ಟು ಮೊತ್ತವೆಷ್ಟು ; ಹಾಗೂ ಇತರೆ ಉದ್ದೇಶಗಳಿಗೆ ಎಷ್ಟು ಮೊತ್ತದ ಹಣವನ್ನು ಬಳಕೆ ಮಾಡಲಾಗಿದೆ ; (ವಿವರ ನೀಡುವುದು)

(ಊ) ದೇವಸ್ಥಾನದ ಧರ್ಮದರ್ಶಿಗಳನ್ನು ನೇಮಕ ಮಾಡುವಾಗ ಯಾವ ಆಧಾರದ ಮೇಲೆ ನೇಮಕ ಮಾಡಲಾಗುತ್ತದೆ ; ಅದಕ್ಕಿರುವ ಮಾನದಂಡಗಳೇನು ;

(ಋ) ರಾಜ್ಯದ ದೇವಸ್ಥಾನಗಳಲ್ಲಿ ಸಾಮೂಹಿಕ ವಿವಾಹ ಏರ್ಪಡಿಸುವ ಹೊಸ ಸಂಪ್ರದಾಯದಂತೆ ಇದುವರೆಗೆ ಎಷ್ಟು ವಿವಾಹ ನೆರವೇರಿಸಲಾಗಿದೆ ; ವಧುವರರಿಗೆ ವರೋಪಚಾರದ ಖರ್ಚು ವೆಚ್ಚಕ್ಕೆ ಎಷ್ಟು ಹಣ ಈವರೆಗೆ ಬಿಡುಗಡೆ ಮಾಡಲಾಗಿದೆ ;

(ಎ) ಎಷ್ಟು ಜೋಡಿ ಇಲ್ಲಿಯವರೆಗೆ ನೋಂದಣಿಯಾಗಿದೆ ? (ವಿವರ ನೀಡುವುದು)